# ಕೊಡಗು  ಸಂಗಾತಿ


ಸಂಪಾದಕಿ : ಪಟ್ಟೆಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K·R·N·N· 240 ಸಂಪುಟ : 2 ಸಂಚಿಕೆ : 2 ಜನವರಿ 16 ರಿಂದ 31–1998 ಪುಟಗಳು : 24 ರೂ. 5




ಯುವ ಪೀಳಿಗೆಗೆ ನಿದರ್ಶರಾದ ರಾಜಕಳೆಯ ಗೌಡಕೇಸರಿ

ದಿ|| ನಿಡ್ಯಮಲೆ ಮುದ್ದಪ್ಪ, ನಿವೃತ ನ್ಯಾಯಧೀಶರ ನೆನಪಿನಂಗಳದಲ್ಲಿ [ಲೇಖನ ಒಳಪುಟದಲ್ಲಿ]

## ಕೊಡಗು ಸಂಗಾತಿ ಪ್ರಥಮ ವರ್ಷದ ಯುಗಾದಿ ವಿಶೇಷಾಂಕ-1998

**ನಂ. 35, "ಸವಿತಾ ನಿಲಯ" 1ನೇ ಕ್ರಾಸ್, 4ನೇ ಬ್ಲಾಕ್,**
**ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ, ಜಯಲಕ್ಷ್ಮಿಪುರಂ, ಮೈಸೂರು-12**

ಕೊಡಗು ಸಂಗಾತಿ ತನ್ನ ಪ್ರಥಮ ವರ್ಷದ ಹುಟ್ಟು ಹಬ್ಬದ ಸಂದರ್ಭದಲ್ಲಿ ವಿಶೇಷ ಸಂಚಿಕೆಯನ್ನು ಹೊರತರಲು ಇಚ್ಛಿಸಿದೆ. ಕರ್ನಾಟಕದಾದ್ಯಂತ ಗೌಡ ಜನಾಂಗದ ಮನೆ ಮಾತಾಗಿ, ಓದುಗರ ಮನಗೆದ್ದು, ಸ್ಫೂರ್ತಿಕೆಯಿಂದ ಮುನ್ನಡೆದಿರುವ ಈ ಪತ್ರಿಕೆ ಜನಾಂಗದವರ ಜಾಹೀರಾತು ಪ್ರಕಟಣೆಗೆ ಉತ್ತಮ ಮಾಧ್ಯಮ ವಾಗಿದೆ.

ಕೊಡಗು ಸಂಗಾತಿ ಹೊರ ತರುತ್ತಿರುವ ಈ ವಿಶೇಷ ಸಂಚಿಕೆ ಕಥೆ, ಸಾಹಿತ್ಯಿಕ, ವೈಚಾರಿಕ, ಹಾಸ್ಯ ಲೇಖನ, ವಿಡಂಬನೆಗಳನ್ನೊಳಗೊಂಡಿರುವುದಲ್ಲದೆ, ಹಿರಿಕಿರಿಯರೆಲ್ಲರಿಗೂ ಪ್ರೋತ್ಸಾಹಿಸುತ್ತಿರುವ ಹಾಗೂ ಪ್ರತಿ ಯೊಬ್ಬ ಗೌಡ ಜನಾಂಗದಲ್ಲಿಯೂ ಶಾಶ್ವತವಾಗಿ ಉಳಿಯುವ ಪತ್ರಿಕೆಯಾಗಿದೆ.

**1998ರ ಏಪ್ರಿಲ್ ಮೊದಲ ವಾರದಲ್ಲಿ ಸುಂದರ ಮುದ್ರಣದೊಂದಿಗೆ ಕ್ರೌನ್ ಆಕಾರದಲ್ಲಿ ಹೊರಬರಲಿರುವ ಈ ಸಂಚಿಕೆಗೆ ತಮ್ಮ ಸಂಸ್ಥೆಯ ಹಾಗೂ ತಮ್ಮ ವೈಯಕ್ತಿಕವಾದ ಶುಭಾಶಯ ಕೋರುವ ಜಾಹೀರಾತುಗಳನ್ನು ನೀಡಿ, ಈ ಪತ್ರಿಕೆ ಬೆಳೆಯಲು ಪ್ರೋತ್ಸಾಹಿಸಬೇಕಾಗಿ ವಿನಂತಿ.**

**ಜಾಹೀರಾತಿನ ವಿವರ –**

| | |
|---|---|
| ಹೊರ ಪುಟಗಳಿಗೆ | ರೂ 3000 |
| ಒಳ ಒಂದು ಪುಟಕ್ಕೆ | ರೂ 2000 |
| ಅರ್ಧ ಪುಟಕ್ಕೆ | ರೂ 1000 |
| ಕಾಲು ಪುಟಕ್ಕೆ | ರೂ 500 |

**(ಲೇಖನಗಳನ್ನು ಹಾಗೂ ಜಾಹೀರಾತುಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ 31-1-1998)**

**ವಿ. ಸೂ. : ವಿಶೇಷ ಸಂಚಿಕೆಗೆ ಲೇಖನಗಳು ಮತ್ತು ಜಾಹೀರಾತುಗಳನ್ನು ಕಳುಹಿಸುವವರು ವಿಶೇಷ ಸಂಚಿಕೆಗೆ ಎಂದು ಬರೆಯತಕ್ಕದ್ದು.**

**ವಂದನೆಗಳೊಂದಿಗೆ,**

**–ಸಂಪಾದಕಿ**

---

## ಬೇಕಾಗಿದ್ದಾರೆ

**ಪತ್ರಿಕಾ ರಂಗದಲ್ಲಿ ಕನಿಷ್ಠ 2 ವರ್ಷ ಅನುಭವ ಹೊಂದಿರುವ, ಎಲ್ಲಾ ಕೆಲಸಗಳನ್ನು ನಿಭಾಯಿಸಬಲ್ಲವರು "ಕೊಡಗು ಸಂಗಾತಿ ಪತ್ರಿಕೆ" ಗೆ ಬೇಕಾಗಿದ್ದಾರೆ.**

**ಆಸಕ್ತರು ಸಂಗಾತಿ ಕಾರ್ಯಾಲಯವನ್ನು ಸಂಪರ್ಕಿಸಿ.**

**–ಸಂ.**

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :
**ಕು॥ ಗೀತಾ ಮೋಂಟಡ್ಕ**

ಪತ್ರಿಕಾ ಪ್ರತಿನಿಧಿ :
**ಕು॥ ಧನು ಚೆರಿಯಮನೆ**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಞ್ಞಾಪುರ ಧರಣಿ ಗಣಪತಿ**

ಮುದ್ರಕರು :
**ಮುಞ್ಞಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 1ನೇ ಮುಖ್ಯ ರಸ್ತೆ
4ನೇ ಬ್ಲಾಕ್, ಡಿವಿಜನಲ್ ಟೆಲಿಕಾಂ
ಕಛೇರಿ ಹತ್ತಿರ, ಜಯಲಕ್ಷ್ಮಿಪುರಂ
**ಮೈಸೂರು-12.**


## ಒಳನೋಟ

ಪುಟಗಳು



## ಅರೆ ಭಾಷಿಕಾ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :

### ಕೊಡಗು ಗೌಡರ ಚರಿತ್ರೆಯಲ್ಲಿ ಸುವರ್ಣಯುಗ ಪ್ರಾರಂಭ

ಒಂದು ದೇಶದ ಚರಿತ್ರೆಯಲ್ಲಿ ಆ ಸಮಯದಲ್ಲಿ ಆ ದೇಶದ ಆರ್ಥಿಕ ಸಾಮಾಜಿಕ ಕಲೆ, ಸಾಹಿತ್ಯ ಸಮೃದ್ಧಿಯ ಘಟ್ಟವನ್ನು ತಲುಪಿದಾಗ ಆ ಕಾಲವನ್ನು ಸ್ವರ್ಣಯುಗವೆಂದು ಚರಿತ್ರೆಕಾರರು ಕರೆಯುತ್ತಾರೆ. ಭಾರತದಲ್ಲಿ ಗುಪ್ತರ ಕಾಲವನ್ನು ಇಂಗ್ಲೆಂಡಿನಲ್ಲಿ ಎಲಿಜಬೆತ್ ರಾಣಿಯ ಕಾಲವನ್ನೂ ಗ್ರೀಸ್‌ನಲ್ಲಿ ಪೆಂಕಿಲಸ್‌ನ ಕಾಲವನ್ನೂ ಸ್ವರ್ಣಯುಗವೆಂದು ಕರೆದಿದ್ದಾರೆ. ಅದೇ ರೀತಿ ಒಂದು ಸಮಾಜದ ಚರಿತ್ರೆಯಲ್ಲೂ ಕಂಡು ಬರುತ್ತದೆ. 1997ನೇ ಇಸವಿಯಲ್ಲಿ ಕೊಡಗಿನ ಗೌಡರ ಚರಿತ್ರೆಯಲ್ಲಿ "ಸ್ವರ್ಣ" ಯುಗ ಪ್ರಾರಂಭವಾಗಿದೆ. ಈಗ ಎರಡು ಮೂರು ವರ್ಷಗಳಿಂದ ಕಾಫಿಯ ಬೆಲೆ ಹೆಚ್ಚಿದುದರಿಂದ ಗೌಡರ ಆರ್ಥಿಕ ಸ್ಥಿತಿ ಸುಧಾರಿಸಿದೆ. ಗೌಡರ ವಿದ್ಯಾರ್ಥಿ, ವಿದ್ಯಾರ್ಥಿನಿಯರು ವಿಶ್ವವಿದ್ಯಾನಿಲಯ ಮಟ್ಟದಲ್ಲಿ ರ‍್ಯಾಂಕ್ ವಿಜೇತರಾಗಿ ಹೊರಹೊಮ್ಮುತ್ತಿದ್ದಾರೆ. ಆಟೋಟಗಳಲ್ಲಿ ರಾಜ್ಯಮಟ್ಟ, ರಾಷ್ಟ್ರಮಟ್ಟದಲ್ಲಿ ಸ್ಪರ್ಧಿಸಿ ಉತ್ತಮ ಪ್ರಶಸ್ತಿ ಪಡೆಯುತ್ತಿದ್ದಾರೆ. ಸರ್ಕಾರಿ ಹಾಗೂ ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು. ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಪ್ರಶಸ್ತಿಗಳನ್ನು ಗಳಿಸುತ್ತಾರೆ. ಸಾಮಾಜಿಕ ಚಟುವಟಿಕೆಗಳು ಬೆಂಗಳೂರು, ಕೊಡಗು ಮತ್ತು ದ.ಕ. ಗೌಡ ಸಮಾಜ, ಕೊಡಗು ಗೌಡ ಯೂತ್ ಅಸೋಷಿಯೇಷನ್, ಮೈಸೂರಿನಲ್ಲಿ ಗೌಡ ಮಹಿಳಾ ಒಕ್ಕೂಟ, ಮಡಿಕೇರಿಯಲ್ಲಿ ಕೊಡಗು ಗೌಡ ಮಹಿಳಾ ಒಕ್ಕೂಟಗಳು ಸ್ಥಾಪನೆಕೊಂಡಿವೆ. ಬೆಂಗಳೂರಿನ ಎರಡು ಸಮಾಜಗಳಲ್ಲಿ ಯುವ ವೇದಿಕೆ ಸ್ಥಾಪಿಸಲಾಗಿದೆ. ಬೆಂಗಳೂರಿನಲ್ಲಿ ಅಮ್ಮಾಜಿ ಪೊನ್ನಪ್ಪನವರ ಕಾವೇರಿನಾಡು ಸಂಸ್ಥೆ ಉದಯವಾಗಿದೆ. ಬೆಂಗಳೂರಿನ ಗೌಡ ಸಮಾಜವು ಆಟೋಟಗಳನ್ನು ಸ್ಪರ್ಧೆಯ ಮೂಲಕ ಪ್ರೋತ್ಸಾಹ ನೀಡಿ, ಯುವಕ ಯುವತಿಯರು ಮುಂದೆ ಬರುವುದಕ್ಕೆ ನೆರವು ನೀಡಿದ್ದಾರೆ. ಮಡಿಕೇರಿಯಲ್ಲಿ ಜಿಲ್ಲಾಮಟ್ಟದ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ರಚಿತವಾಗಿದೆ. ಮಡಿಕೇರಿಯಲ್ಲಿ ಗೌಡ ಸಾಂಸ್ಕೃತಿಕ ಅಕಾಡೆಮಿ ಮುಖಾಂತರ ನಶಿಸಿಹೋದ ಗೌಡ ಸಾಂಪ್ರದಾಯಿಕ ಸೋಬಾನೆಗಳು, ದೈವದ ಕೋಲ, ಕೋಲಾಟ, ನೃತ್ಯರೂಪಕ, ಭರತನಾಟ್ಯ, ಅರೆಭಾಷೆಯ ಕಿರುನಾಟಕ, ಬೆಂಗಳೂರು ಗೌಡ ಸಮಾಜದ ಭಾಷಣ ಸ್ಪರ್ಧೆ, ಕ್ವಿಜ್ ಸ್ಪರ್ಧೆಗಳನ್ನು ಏರ್ಪಡಿಸಿ ಯುವ ಪೀಳಿಗೆಗೆ ಜ್ಞಾನ ಭಂಡಾರವನ್ನು ಬೆಳೆಸುವ ಅವಕಾಶ ಮಾಡಲಾಗಿದೆ.

ಸಾಹಿತ್ಯದಲ್ಲು, ಸಾಹಿತ್ಯ ಮತ್ತು ಪತ್ರಿಕಾರಂಗದಲ್ಲಿ ತಮ್ಮದೇನು ಕಡಿಮೆ ಎಂಬಂತೆ ಗೌಡರ ಚರಿತ್ರೆ, ಸಂಸ್ಕೃತಿ, ಕಥೆ, ಕವನಗಳನ್ನು ಜನತೆ ಓದಲು ಬರವಣಿಗೆಗಳ ಮೂಲಕ ತಮ್ಮಲ್ಲಿ ಬಚ್ಚಿಟ್ಟುಕೊಂಡಿದ್ದ ಪ್ರತಿಭೆಯನ್ನು ಹೊರಗೆಡಲು ಸಂಧರ್ಭದ ಅವಕಾಶಕ್ಕಾಗಿ ಮೈಸೂರಿನಿಂದ ಹೊರಹೊಮ್ಮಿದ ಕೊಡಗು ಸಂಗಾತಿ ವೈಯಕ್ತಿಕ ಪರಿಚಯಗಳ ಅರಿವು ತಿಳಿವುಗಳ ಮೂಲಕ ಮಾಧ್ಯಮವಾಗಿ ಜನರ ಐಕ್ಯತೆಯನ್ನು ಸಾಧಿಸುವ ದಿಟ್ಟಮಾಧ್ಯಮವಾಗಿ ಹೊರಹೊಮ್ಮಿದೆ. ಈ ಮೇಲಿನ ಸಂಗತಿಯೆಲ್ಲವು 1997ನೇ ಸಂವತ್ಸರದಲ್ಲಿ ಕಾಣಿಸಿಕೊಂಡ ಗೌಡ ಜನರ ಸ್ವರ್ಣಯುಗದ ಪ್ರಾರಂಭಿಕ ಮುನ್ಸೂಚನೆಗಳು.

---

ಜನಾಂಗದಲ್ಲಿ ದುರ್ಜನರು ಬೆಳೆಯಲು ಸಜ್ಜನರ ನಿಷ್ಕ್ರಿಯತೆಯೇ ಕಾರಣ

—ಸಂಗ್ರಹ

# ಗೌಡಕೇಸರಿ ದಿ|| ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

**ಕೊಡಗಿನಲ್ಲಿ ಗೌಡಜನಾಂಗವು ಕೊಟ್ಟೆಪಾಳೆ, ತುಳುನ ಎಂಬ ನಿಂದನೆಯ ನುಡಿಗಳನ್ನು ಸಹಿಸಲಾರದೆ ತಮ್ಮ ಮಾತೃಭಾಷೆಯನ್ನು ಬಳಸಲೂ ಹಿಂಜರಿಯುತ್ತಿದ್ದ ಕಾಲವೊಂದಿತ್ತು. ಜಗತ್ತಿನಲ್ಲಿ ಧರ್ಮವು ನಶಿಸಿ ಅಧರ್ಮವು ಹೆಚ್ಚಾದಾಗ ವಿಷ್ಣುವೇ ಅವತಾರವೆತ್ತಿ ಬಂದು ಧರ್ಮವನ್ನು ಕಾಪಾಡುತ್ತಾನೆಂಬುದು ಹಿಂದುಪುರಾಣಗಳ ಹೇಳಿಕೆ. ಅದೇ ರೀತಿ ಗೌಡಜನಾಂಗದ ಪಾಲಿಗೆ ಸೂರ್ಯನೋಪಾದಿಯಲ್ಲಿ ಜನ್ಮ ತಳೆದು ಬಂದ ಶ್ರೀಹರಿಯೇ ನಿಡ್ಯಮಲೆ ಮುದ್ದಪ್ಪನವರು. ಗೌಡ ಜನಾಂಗದಲ್ಲೇ ಏಕೈಕ ನ್ಯಾಯಾಧೀಶರಾಗಿ, ಕೊಡಗಿನಲ್ಲಿ ಗೌಡ ಜನಾಂಗದ ಇರುವಿಕೆಯನ್ನು ಸ್ಪಷ್ಟಗೊಳಿಸಿ, ಅವರನ್ನು ವಿದ್ಯಾವಂತ ಜನಾಂಗವನ್ನಾಗಿ ರೂಪುಗೊಳಿಸಿ ಸಮಾಜದಲ್ಲಿ ತಲೆಯೆತ್ತುವಂತೆ ಮಾಡಿದ ಗೌಡಕೇಸರಿ ಶ್ರೀ ನಿಡ್ಯಮಲೆ ಮುದ್ದಪ್ಪನವರ ರೋಚಕ ಜೀವನ ಕಥೆಯನ್ನು ಹಲವಾರು ಲೇಖಕರು ಸಾದರಪಡಿಸಿದ್ದಾರೆ. 'ಗೌಡಕೇಸರಿ ದಿ|| ನಿಡ್ಯಮಲೆ ಮುದ್ದಪ್ಪನವರ ಜನ್ಮಶತಾಬ್ಧಿ ಸ್ಮರಣ ಸಂಚಿಕೆ' ಎಂಬ ಹೊತ್ತಿಗೆಯು ಬೆಂಗಳೂರಿನ 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ' ದಿಂದ ಪ್ರಕಾಶನಗೊಂಡಿದೆ. ಈ ಪುಸ್ತಕದಿಂದ ಆಯ್ದ ಲೇಖನಗಳನ್ನು 'ಸಂಗಾತಿ'ಯು ಕಂತುಗಳ ರೂಪದಲ್ಲಿ ನಿಮ್ಮ ಮುಂದಿಡುತ್ತಿದೆ.**

**–ಸಂ**

ಲೇಖಕ : ದಿ|| ಶ್ರೀ ನಿಡ್ಯಮಲೆ ಅನಂತ್

ನನ್ನ ತಾಯಿಯವರು ಹೇಳಿದಂತೆ ಗುಡ್ಡೆ ನಿಡ್ಯಮಲೆಯಲ್ಲಿ ನಿಡ್ಯನೆಂಬ ಆದಿವಾಸಿಯೊಬ್ಬನಿದ್ದು, ನಮ್ಮ ಹಿರಿಯರು ಅವನಿಂದ ಸ್ವಲ್ಪ ಸ್ಥಳ ಪಡೆದುಕೊಂಡಿರುವುದರಿಂದಲೂ, ಮಲೆಯಿಂದ ಆವೃತ್ತವಾದ ಸ್ಥಳವಾದುದರಿಂದ ನಿಡ್ಯನ ಮಲೆ ಕ್ರಮೇಣ ನಿಡ್ಯಮಲೆ ಎಂದು ಸದ್ರಿ ಮನೆತನಕ್ಕೆ ಹೆಸರಾದುದ್ದು. ಇದು ನಿಜವೆಂಬ ವಿಚಾರ ನನ್ನದು! ನಮ್ಮ ಸಕುಟುಂಬದ ಹಿರಿಯ ಶ್ರೀಯುತ ಮುಂದಣ್ಣನವರು, ತಮ್ಮ ಹಿರಿಯರು ಸುಳ್ಯದಿಂದ ಬಂದು ಭಾಗಮಂಡಲದ ದೇವಸ್ಥಾನದ ಆಸುಪಾಸಿನಲ್ಲಿ ನೆಲೆಸಿದರು ಎಂದು ಹೇಳುತ್ತಾರೆ. ವಿಪರ್ಯಾಸವೆನಿಸಿದ್ದರೂ ನಮ್ಮ ಗುಡ್ಡೆ ನಿಡ್ಯಮಲೆ ಮನೆಯವರು ಮತ್ತು ಭಾಗಮಂಡಲದ ಹತ್ತಿರ ದರ್ಗನ ಮನೆಯೆಂದು ಹೆಸರಿರುವ ಮನೆಯವರೂ ಒಂದೇ ಕುಟುಂಬದವರು. ಗುಡ್ಡೆ ನಿಡ್ಯಮಲೆಯಲ್ಲಿ ಮನೆ ದೇವರಾಗಿ ಆರಾಧಿಸುವ ವೆಂಕಟರಮಣ, ವಿಷ್ಣುಮೂರ್ತಿ, ಧರ್ಮದೈವ, ಪಾಷಾಣಮೂರ್ತಿ ದೈವಗಳು ಹಾಗೂ ದೈವದ ಉತ್ಸವಕ್ಕೆ ದರ್ಗನ ಮನೆಯಿಂದಲೂ ಅಕ್ಕಿಮಂತಿಗೆ ನೀಡುವ ಕ್ರಮವಿತ್ತಂತೆ.

ನನ್ನ ತಾಯಿ ಚಿನ್ನಮ್ಮನವರು ಸುಳ್ಯ ತಾಲ್ಲೂಕಿನ ಅಡ್ಡಂಗಾಯ ಮನೆತನದಲ್ಲಿ ಅವರ ತಂದೆಗೆ ಒಬ್ಬರೇ ಪುತ್ರಿಯಾಗಿ ಜನಿಸಿದರು. ನಮ್ಮ ತಂದೆ ಬೆಳ್ಯಪ್ಪನವರು ಇವರನ್ನು 1912 ರಲ್ಲಿ ಲಗ್ನವಾದರು. ನನ್ನ ತಂದೆಯವರು ಮಡಿಕೇರಿಯ ಚೀಫ್ ಕಮೀಷನರ್ ಆಫೀಸಿನಲ್ಲಿ ಹೆಡ್ ಮುನ್ಸಿ ಆಗಿ ಸೇವೆ ಸಲ್ಲಿಸುತ್ತಿದ್ದರು. ನನ್ನ ತಂದೆಯವರು ತನ್ನ 53ನೇ ವಯಸ್ಸಿನಲ್ಲಿ ನಿಧನರಾದರು. ಅನಂತರ ನಮ್ಮ ತಾಯಿಯೇ ಜವಾಬ್ದಾರಿ ಹೊತ್ತು ನಮ್ಮ ಉನ್ನತಿಗೆ ಕಾರಣಕರ್ತೆಯಾದರು. ಹಾಗಾಗಿ ಅವರು ಸಂದರ್ಭ ಬಂದಾಗಲೆಲ್ಲ ನಮ್ಮ ಹಿರಿಯರ ಬಗ್ಗೆ ತಿಳಿಸುತ್ತಿದ್ದರು ಹಾಗಾಗಿ ನನ್ನ ತಂದೆಯ ತಂದೆ. ಪಾರುಪತ್ತೇಗಾರ ದಿ|| ರಾಮಪ್ಪನವರ ಹಾಗೂ ಆಗಿನ ಪರಿಸರದ ಇತರ ಕೆಲವು ವಿಷಯಗಳ ಬಗ್ಗೆ ಬರೆಯಲು ಸಮರ್ಥನಾದೆ.

### ನನ್ನ ಅಜ್ಜ ರಾಮಪ್ಪನವರ ತಂದೆ ಸುಬ್ಬಯ್ಯನವರು

ನನ್ನ ಅಜ್ಜನಿಗೆ ಐದನೇ ತರಗತಿಯವರೆಗೆ ವಿದ್ಯೆ ಕೊಡಲಾಗಿತ್ತು. ಈ ಅಲ್ಪ ವಿದ್ಯೆಯಲ್ಲಿ ನನ್ನ ಅಜ್ಜ ರಾಮಪ್ಪನವರು ಕೊಡಗಿನಲ್ಲಿ ಭಾಗಮಂಡಲ ನಾಡಿನಲ್ಲಿ ಪಾರುಪತ್ತೇಗಾರರಾದದ್ದು ಹೇಗೆ ಎಂದು ಆಶ್ಚರ್ಯವಾಗುತ್ತಿದೆ. ರಾಮಪ್ಪನವರ ಕಾಲದಲ್ಲಿ ಪೆರಾಜೆ ಭಾಗಮಂಡಲ ನಾಡಿಗೆ ಸೇರಿತ್ತು. ಆ ಕಾಲದಲ್ಲಿ ಪೆರಾಜೆಯಿಂದ ಮಡಿಕೇರಿ ಭಾಗಮಂಡಲಕ್ಕೆ ನಡಿಗೆಯ ದಾರಿ ಅಷ್ಟೆ. ಹಿಂದಿನವರು ಎಷ್ಟು ಮೈಲಿಗಳ ದೂರವಿದ್ದರೂ ನಡೆದೆ ಹೋಗುತ್ತಿದ್ದರು ಎಂದರೆ ಈಗಿನವರಿಗೆ ನಂಬಲಸಾಧ್ಯವಾದ ವಿಷಯವಾಗಿದೆ. ಅನುಕೂಲಸ್ಥರು ಎತ್ತಿನ ಗಾಡಿಯಲ್ಲಿ ಪ್ರಯಾಣಿಸುತ್ತಿದ್ದರು. ಹೆಚ್ಚಿನ ಸೌಕರ್ಯವೆಂದರೆ ಪಲ್ಲಕ್ಕಿಅಥವಾ ಕುದುರೆ. ನಮ್ಮಜ್ಜ ಆಗಾಗ ಭಾಗಮಂಡಲ ನಾಡಿಗೆ ಹೋಗಬೇಕಾಗಿ ಬರುತ್ತಿತ್ತು. ಸದ್ರಿನಾಡಿನ ಎಲ್ಲಾ ಗ್ರಾಮಗಳ ರೆವಿನ್ಯೂ ಕೆಲಸ ಇವರ ಅಧಿಕಾರಕ್ಕೊಳಪಟ್ಟಿತ್ತು. ಆದ್ದರಿಂದ ಪಾರುಪತ್ತೇಗಾರಿಕೆ ಅಷ್ಟೊಂದು ಸುಲಭವೂ ಅಲ್ಲ. ಆಗಿನ ಕಾಲದಲ್ಲಿ ಅದು ದೊಡ್ಡ ಹುದ್ದೆಯಾಗಿತ್ತು. ನಮ್ಮಜ್ಜನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಹೋಗುತ್ತಿದ್ದರಂತೆ. ಹೋಗುವಾಗ ಅದೊಂದು ಮೆರವಣಿಗೆಯಂತೆ ಕಂಡುಬರುತ್ತಿತ್ತಂತೆ. ನಮ್ಮಜ್ಜ ಜನರ ಪ್ರೀತಿ ಮತ್ತು ಮರ್ಯಾದೆ ಗಳಿಸಿದ್ದರಂತೆ.

(ಮುಂದಿನ ಸಂಚಿಕೆಗೆ)

## ಮದುವೆ ಸಮಾರಂಭಗಳಲ್ಲಿ ಗೌಡ ಉಡುಪಿನಲ್ಲಿ ಪೇಟಾಧಾರಿಯಾಗಿ ಮೆರೆದ

# ದಿ|| ಶ್ರೀ ಕೋಡಿ ಬೋಜಪ್ಪ ಮೇದಪ್ಪ

ಭಾಗಮಂಡಲನಾಡು, ಪದಕಲ್ಲು ಗ್ರಾಮದ ಶ್ರೀಮತಿ ಮತ್ತು ಶ್ರೀ ಕೋಡಿ ಬೋಜಪ್ಪ ಮತ್ತು ತಂಗಮ್ಮ ದಂಪತಿಗಳ 2 ಗಂಡು, 2 ಹೆಣ್ಣು ಮಕ್ಕಳಲ್ಲಿ ಇವರು ಕಿರಿಯವರು. ಹಿರಿಯ ಅಣ್ಣ ಮುದ್ದಯ್ಯ ಉತ್ತಮ ರೈತರಾಗಿ ಮಾದರಿ ಜೀವನ ಸಾಗಿ ಸುತ್ತಿದ್ದಾರೆ. ಒಂದನೇ ಮಗಳು ಪದಕಲ್ಲು ಗ್ರಾಮದ ನಂಗಾರು ಚಂಗಪ್ಪನವರನ್ನು ವರಿಸಿದ್ದಾರೆ. 2ನೇ ಯವರು ಸೋಮವಾರ ಪೇಟೆ ತಾ|| ಗಲಗಂದೂರು ಗ್ರಾಮದ ಕೀಜನ ಲಿಂಗಪ್ಪನವರನ್ನು ವಿವಾಹವಾಗಿ ದ್ದಾರೆ. ಮೇದಪ್ಪನವರು 10-6-1938 ರಲ್ಲಿ ಜನಿಸಿ, ಅಮಂದೂರು ಗ್ರಾಮದ ಪಟ್ಟಡ ಅಯ್ಯಮ್ಮನವರ ಪುತ್ರಿ ಮಾಚಮ್ಮ ನವರನ್ನು ವಿವಾಹವಾಗಿದ್ದಾರೆ. ಇವರು ತಮ್ಮ ಪ್ರಾಥಮಿಕ ವಿದ್ಯೆಯನ್ನು ಸರಕಾರಿ ಮಾದರಿ ಪ್ರಾಥಮಿಕ ಶಾಲೆಯಲ್ಲಿ ಅಂದಿನ 7ನೇ ತರಗತಿಯನ್ನು ಪಾಸು ಮಾಡಿದರು. ಇವರು ಬಡವರ್ಗದ ಸಂಸಾರದಲ್ಲಿ ಜನಿಸಿ ದರು. ಇವರ ಅಣ್ಣ ಚಿಕ್ಕ ಪ್ರಾಯದಲ್ಲೆ ತೀರಿಕೊಂಡಾಗ ಮನೆಯ ವ್ಯವಹಾರವೆಲ್ಲ ಇವರ ಮೇಲೆ ಬಿದ್ದಿತು.

ಇವರು ಟೈಲರಿಂಗ್, ಬಟ್ಟೆ ಅಗಂಡಿ ಮತ್ತು ಮನೆ ವ್ಯವಹಾರವನ್ನು ನಡೆಸು ತ್ತಿದ್ದರು. ಬರಬರುತ್ತಾ ಶ್ರೀಯುತರು ಸಮಾಜ ಸೇವೆ ಮಾಡುತ್ತಾ ಭಾಗ ಮಂಡಲದ ಜೇನು ಸಂಘದ ನಿರ್ದೇಶಕ ರಾಗಿ 1972ರಲ್ಲಿ ಆಯ್ಕೆಯಾದರು, ನಂತರ ಚೆಟ್ಟಿಮಾನಿಯ ನ್ಯಾಯಬೆಲೆ ಅಂಗಡಿ ಮತ್ತು ಜೇನುಸೊಸೈಯ ಕಾರ್ಯ ದರ್ಶಿಯಾಗಿ 1976ರ ತನಕ ದುಡಿದಿ ದ್ದಾರೆ. ತಾನು ಓದಿದ ಚೆಟ್ಟಿಮಾನಿಶಾಲೆಯ ನಿರ್ದೇಶಕರಾಗಿ ದುಡಿಮೆ ತನ್ನ ಅಂತಿಮ ಕ್ಷಣದ ತನಕ. ಭಾಗಮಂಡಲ ಕಾವೇರಿ ಪದವಿ ಪೂರ್ವ ಕಾಲೇಜಿನಲ್ಲಿ ಕಾರ್ಯದರ್ಶಿ ಯಾಗಿ 1975 ರಿಂದ 1980 ರ ತನಕ ದುಡಿಮೆ, ನಂತರ 1980 ರಿಂದ 1985 ರ ತನಕ ಅಧ್ಯಕ್ಷಗಿರಿ ಪಟ್ಟ.

ಪದಕಲ್ಲು ಗ್ರಾಮಧ್ಯಾಕ್ಷರಾಗಿ ಸಾಕಷ್ಟು ದುಡಿಮದು ಅಲ್ಲದೆ, 15 ವರ್ಷಗಳ ಕಾಲ ತನ್ನೂರಿನ ಭಗವತಿ ದೇವಿಯ ಉತ್ಸವ ದಲ್ಲಿ ದೀವಿಗೆ ಹಿಡಿದ ಕೀರ್ತಿ ಇವರದು. ಊರಿನ ವ್ಯಾಜ್ಯ ಪಂಚಾಯಿತಿಯ ತೀರ್ಮಾನದಲ್ಲಿ ಎತ್ತಿದ ಕೈಯಾಗಿ ಈ ಗ್ರಾಮದಲ್ಲಿ ಪ್ರಭಾವ ಬೀರಿದರು. ಊರಿನ ಹಬ್ಬಗಳು ಯಾವುದೇ ಲೋಪದೋಷ ವಿಲ್ಲದೆ ನಿರಂತರವಾಗಿ ಇವರಿಂದ ನಡೆಯು ತ್ತಿದ್ದವು. ಇವರ ಈ ಕಾಯಕವು ಯುವ ಪೀಳಿಗೆಗೆ ಮಾದರಿಯಾದ ವ್ಯಕ್ತಿತ್ವ ವಾಗಿದೆ.

ತನ್ನ ಸ್ವಸಾಮರ್ಥ್ಯದಿಂದ ನಂಗಾರು ಮತ್ತು ಕೊಡಿಮನೆತನಗಳು ಕೈಲ್ ಮುಹೂರ್ತ ಹಾಗೂ ಕ್ರೀಡಾ ಚಟುವಟಿ ಕೆಗಳನ್ನು ನಡೆಸುವಲ್ಲಿ ಯಶಸ್ಸು ಕಂಡಿ ದ್ದವು. ಕೋಡಿ ಐನ್‌ಮನೆಯು ಬಿದ್ದು ಮಣ್ಣುಗೂಡಿದಾಗ ಅಲ್ಲಿಯ ದೇವರನ್ನು ತಂದು ತನ್ನ ಸ್ವಂತ ಮನೆಯನ್ನೆ ದೈವ ನೆಲೆಯಾಗಿ ಪರಿವರ್ತಿಸಿ, ಅಲ್ಲಿಯೇ ಶ್ರೀ ದೈವದ ಹರಿಸೇವೆ ಮತ್ತು ಕೆಂಚರಾಯನ ಉತ್ಸವ ಮಾಡಿ ಏಳು ಮಲೆ ತಿರುಪತಿ ತಿಮ್ಮಪ್ಪನ ಪರಮಭಕ್ತರಾಗಿ ಸೇವೆ ಗೈದ ಇವರ ಭಕ್ತಿಯು ಮೇಲ್ಮಟ್ಟ ದಾಗಿತ್ತು.

ತನ್ನ ಜೀವಿತಾವಧಿಯಲ್ಲಿ ಬಡಬಗ್ಗರಿಗೆ ಸಾಕಷ್ಟು ಧನ ಸಹಾಯ ಮಾಡಿದರಲ್ಲದೆ, ಕೈಲಾದ ಕಿಂಚಿತ್ ಸೇವೆಯನ್ನು, ಧಾನ್ಯ ಸೇವೆಯನ್ನು ಸಹ ಮಾಡಿದ ಕೀರ್ತಿ ಇವರದು.

ಕಾಂಗ್ರೆಸಿನ ಸಕ್ರೀಯ ಕಾರ್ಯಕರ್ತ ರಾಗಿ ಚೆಟ್ಟಿಮಾನಿ ಪಂಚಾಯಿತಿ ಅಧ್ಯಕ್ಷ ರಾಗಿ ಶ್ರೀಮತಿ ಇಂದಿರಾಗಾಂಧಿಯವರ ಅಧಿಕಾರದ ಅವದಿ 1976ರ ತನಕ ಸೇವೆ ಸಲ್ಲಿಸಿ ತದನಂತರ 1977ರಲ್ಲಿ ಜನತಾ ಪಕ್ಷದ ಉದಯವಾದಾಗ ಚೆಟ್ಟಿಮಾನಿಯ ಪಂಚಾಯಿತಿ ವ್ಯಾಪ್ತಿಯಲ್ಲಿ ಜನತಾ ಪಕ್ಷದ ಅಧ್ಯಕ್ಷರಾಗಿಯೂ ಕಾರ್ಯನಿರ್ವ ಹಣೆ 1979ರಲ್ಲಿ ಜನತಾಪಾರ್ಟಿ ಹೋಳಾದ ನಂತರ R.S S. ನ ಕಡೆಗೆ ಒಲವು. ಇವರು R.S.S. ನ ಸಕ್ರೀಯ ಕಾರ್ಯ ವಾಹಕರಾಗಿ ಚೆಟ್ಟಿಮಾನಿಯ ಬಿಜೆಪಿ ಘಟಕದ ಅಧ್ಯಕ್ಷರಾಗಿಯು ಕುಂದಚೇರಿ ಗ್ರಾಮ ಪಂಚಾಯಿತಿಯ ಸದಸ್ಯರಾಗಿ ಸುಮಾರು 4 ವರ್ಷಗಳ ಸೇವೆಗೈದರು. ವಿಶ್ವ ಹಿಂದೂ ಪರಿಷತ್ತಿನಲ್ಲಿ ತನ್ನನ್ನು ತಾನೇ ಸಮರ್ಪಿಸಿಕೊಂಡು, ಕಟ್ಟಾ ಹಿಂದೂ ಅಭಿಮಾನಿಯಾಗಿದ್ದ ಇವರು ಚೆಟ್ಟಿಮಾನಿ ವಿಶ್ವ ಹಿಂದೂ ಪರಿಷತ್‌ನ ಅಧ್ಯಕ್ಷರಾಗಿ 1997ರ ತನಕ ತನ್ನ ಅಮೋಘ ಸೇವೆ ಯನ್ನು ಆ ಪರಿಸರಕ್ಕೆ ಸಲ್ಲಿಸಿದರು. ಇವರು ಪ್ರತಿದಿನ ಮನಸ್ಸು ಚಂಚಲಗೊಳ್ಳದಿರಲು ಯೋಗಾಸನವನ್ನು ಕಾಯಕವನ್ನಾಗಿ ಮಾಡಿಕೊಂಡಿದ್ದರು.

ಕಟ್ಟಾ ಗೌಡ ಅಭಿಮಾನಿಯಾದ ಇವರು ತಮ್ಮ ಜನಾಂಗದ ಮದುವೆ ಸಂದರ್ಭದಲ್ಲಿ, ಕಚ್ಚೆ ಪಂಚೆ, ಕೋಟು, ರುಮಾಲು ಧರಿಸಿ ಹೋಗುವ ರೀತಿ ಆಕ ರ್ಷಣೀಯವಾಗಿತ್ತು. ಇವರು ಚೆಟ್ಟಿಮಾನಿ ಯಲ್ಲಿ ಸ್ವಾತಂತ್ರ್ಯ ಹೋರಾಟಗಾರ ವೇದಿಕೆಯನ್ನು ಹುಟ್ಟುಹಾಕಿ 1837ರ ಅಮರಸುಳ್ಯ ಕಾಟಕಾಯಿಯಲ್ಲಿ ಹೋರಾಡಿ ಹುತಾತ್ಮರಾದ ಸುಭೇದಾರ್ ಗುಡ್ಡೇರ

15ನೇ ಪುಟಕ್ಕೆ

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

**ಹೆ.** ಕ. – ಆದರೆ, ರೂಪದಲ್ಲಿ ಮನ್ಮಥನಿಗೆ ಹೋಲುವ ನಿಮ್ಮ ಪುರುಷನು ನಮ್ಮ ಕನ್ಯೆಯನ್ನು ದೇವತಾ ಸಾಕ್ಷಿಯಾಗಿ ಪಾಣಿಗ್ರಹಣ ಮಾಡಿಲ್ಲವೊ ?

ಗಂ.ಕ. – ಹೌದು.

ಹೆ.ಕ. – ಆದರೆ ನಮ್ಮ ವರ್ಣಾಶ್ರಮದ ಧರ್ಮಕ್ಕನುಸಾರವಾಗಿಯೂ, ಕಾರ್ಯಕ್ರಮವಾಗಿಯೂ ನಡೆದ ಪಾಣಿಗ್ರಹಣ ಸಂಸ್ಕರಣಗಳಲ್ಲಿ ಅನೇಕ ವಿಷಯಗಳಲ್ಲಿ ತಪ್ಪುನೆಪ್ಪುಗಳು, ಕುಂದುಕೊರತೆಗಳು ಬಂದಿರಬಹುದು. ಇಂತಹ ನ್ಯೂನತೆಗಳನ್ನು ಮಹಾನುಭಾವರಾದ ಸಭಿಕರು, ಕರುಣಾಸಾಗರನಾದ ಭಗವಂತನಲ್ಲಿ ಕ್ಷಮಿಸಬೇಕೆಂದು ಕೇಳಿ ದೇವತಾಸಾಕ್ಷಿಯಾಗಿ ಕನ್ಯಾದಾನ ಮಾಡಿದ್ದೇವೆಯಲ್ಲವೋ?

ನಮ್ಮ ಕನ್ನಿಕೆಯ ನೆತ್ತಿ ಎಣ್ಣೆ ಆರಲಿಲ್ಲ, ಅಂಗೈ ಬರೆ ಮಾಜಲಿಲ್ಲಿ. ಅಂಗಾಲಿಗೆ ಧೂಳು ಸೋಕಲಿಲ್ಲ, ಮೃದುವಾದ ಬಾಲ್ಯ ಭಾಷೆಗಳಿಂದಲೂ, ಆಟಪಾಠಗಳಿಂದಲೂ ತಂದೆತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಬಾಲ್ಯವಸ್ಥೆಯನ್ನು ಮೀರದ ನಮ್ಮ ಮುದ್ದು ಬಾಲಕಿಯನ್ನು ಯಾವ ರೀತಿ ಸಾಕುವಿರಯ್ಯಾ ?

ಗ.ಕ. – [ಮೌನವಾಗಿ ನಿಂತುಕೊಳ್ಳುವರು]

ಹೆ.ಕ. – ನಮ್ಮ ಹೆಣ್ಣು ಮಾವನ ಗುಣವನ್ನು ಅರಿಯಳು, ಅತ್ತೆಯ ಅತಿಶಯವನ್ನು ತಿಳಿಯಳು, ಸಖಿಯರ ಗುಣದೋಷಗಳನ್ನು ಗ್ರಹಿಸಳು, ನಿರಂತರವೂ ಸೂರ್ಯನನ್ನು ಬಯಸುವ ತಾವರೆಯಂತೆಯೂ, ಚಂದ್ರನನ್ನು ನೆನೆಯುವ ನೈದಿಲೆಯಂತೆಯೂ, ಮಳೆಗಾಲವನ್ನು ಬಯಸುವ ಮತ್ಸ್ಯಕುಲದಂತೆಯೂ, ಕಾರ್ಮುಗಿಲನ್ನು ಬಯಸುವ ಬೆಳ್ಳಕ್ಕಿಯಂತೆಯೂ, ಮೇಘದೂತನಿಗೆ ಆಶೆಪಟ್ಟು ಪಂಪಾಸಾಗರದಲ್ಲಿ ತೇಲಾಡುತ್ತಿರುವ ಹಂಸದಂತೆ ಇರುವ ನಮ್ಮ ಮುದ್ದು ಬಾಲಕಿಯನ್ನು ರಕ್ಷಿಸಿಕೊಳ್ಳುವವರಾರಯ್ಯ ?

ಗ.ಕ. – ವರನಯ್ಯಾ.

ಹೆ.ಕ. - ನಮ್ಮ ಹೆಣ್ಣು ಸೂರ್ಯದೇವನಿಗೆ ಛಾಯಾದೇವಿ ಹೇಗೊ, ಚಂದ್ರನಿಗೆ ರೋಹಿಣಿದೇವಿ ಹೇಗೊ, ವಸಿಷ್ಠನಿಗೆ ಅರುಂಧತಿ ಹೇಗೊ, ಆಧಿಸೇನನಿಗೆ ಅನುಸೂಯಾ ದೇವಿ ಹೇಗೋ, ಸತ್ಯವಂತನಿಗೆ ಸಾವಿತ್ರಿದೇವಿ ಹೇಗೋ, ಶ್ರೀರಾಮಚಂದ್ರನಿಗೆ ಜಾನಕೀದೇವಿ ಹೇಗೋ ಹಾಗೆಯೇ ವಸಂತನಿಗೆ ತಂಗಾಳಿ ಬೀಸಿದಂತೆ, ಮನ್ಮಥನ ಮುಂದೆ ರತಿದೇವಿ ಸೇರಿದಂತೆ, ಈ ದಪಂತಿಗಳಲ್ಲಿ ಭಿನ್ನಭೇದ ಬಾರದಂತೆ ಹಿತೋಪದೇಶಗಳನ್ನು ಹೇಳಿ ಸರಿಪಡಿಸಿಕೊಳ್ಳುವವರಾರಯ್ಯ?

ಕೃಪೆ :

**ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ**

ಗ.ಕ – ವರನ ಹಿರಿಯರು.

ಹೆ.ಕ. - ನಮ್ಮ ಹೆಣ್ಣಿಗೆ ಊಟ ಮಾಡುವುದಕ್ಕೆ ಗಂಗಳವನ್ನೂ, ಕೈತೊಳೆಯುವುದಕ್ಕೆ ತಂಬಿಗೆಯನ್ನೂ, ಮಲಗುವುದಕ್ಕೆ ಯೋಗ್ಯವಾದ ರತ್ನ ಖಚಿತವಾದ ಮಂಚವನ್ನೂ, ಕರೆಯುವುದಕ್ಕೆ ಯೋಗ್ಯವಾದ ಗೋವಿನ ಹಿಂಡನ್ನೂ, ಉಡಿಗೆ ತೊಡಿಗೆಗಳನ್ನು ಕೊಟ್ಟುದಲ್ಲದೆ, ದ್ರವ್ಯವನ್ನೂ ಸಹ ಬಳುವಳಿಯಾಗಿ ಕೊಟ್ಟಿರುತ್ತೇವೆ. ಹೀಗೆ ಬಳುವಳಿಯಾಗಿ ಕೊಟ್ಟ ದ್ರವ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರಗಟ್ಟಲೆ ವೃದ್ಧಿಪಡಿಸಿಕೊಡುವವರು ಯಾರಯ್ಯಾ ?

ಗಂ.ಕ. – ವರನಯ್ಯಾ.

ಹೆ.ಕ. – ಅಯ್ಯಾ, ಮಹಾಶಯರೇ, ಬಾಲ್ಯಾವಸ್ಥೆಯಲ್ಲಿರುವ ನಮ್ಮ ಕನ್ನಿಕೆಯು ಅತ್ತೆ ಎಂಬ ಮಾತಿಗೆ ತಾಯಿ ಎಂತಲೂ, ಮಾವ ಎಂಬ ಶಬ್ದಕ್ಕೆ ತಂದೆ ಎಂತಲೂ, ಪತಿ ಎಂಬ ವಚನಕ್ಕೆ ಗತಿ ಎಂತಲೂ, ತಿಳಿದಿರುವಳು. ನಾವು ಕನ್ಯಾದಾನ ಮಾಡಿದ್ದಾಗ್ಯೂ, ಈ ದಂಪತಿಗಳು ಮಹಾನುಭಾವರಾದ ಸಭಿಕರ ಕರುಣಾಕಟಾಕ್ಷದಿಂದಲೂ, ದಯಾಸಾಗರನಾದ ಪರಮಾತ್ಮನ ಅನುಗ್ರಹದಿಂದಲೂ, ಪುತ್ರ ಪೌತ್ರ, ಪೌಪುತ್ರ ವಂಶಾಭಿವೃದ್ಧಿಯಾಗಿ ಬಾಳಲೆಂದೂ ಸರ್ವಸಂಪನ್ನ ಭಾಗ್ಯ ಸಮಭಿವೃದ್ಧಿಯಾಗಿ ಬಾಳಲೆಂದೂ ಚಂದ್ರಶೇಖರನಾದ, ಶ್ರೀಅಂಬಾಧರನಾದ ಬಾಲಗಂಗಾಧರನಾದ ಫಾಲ ನೇತ್ರನಾದ ಪಾರ್ವತಿರಮಣನು ಅನುಗ್ರಹಿಸಲಿ. ಅಲ್ಲದೆ ಬೆಳಗಿನ ಜಾವದಲ್ಲಿ ಬೆಳ್ಳಕ್ಕಿಯಂತೆ ಪ್ರಕಾಶಿಸುವ ಕುಂಭಿನಿಕಾಂತೆಯಳಂತೆ, ಸಂಧ್ಯಾರಾಗದಂತೆ, ಬಾಲಸೂರ್ಯನಂತೆ, ಹೊಳೆಯುವ ನವರತ್ನಕಿರೀಟಗಳಂತೆ ಪ್ರಜ್ವಲಿಸುವ, ಉದಯ ಪರ್ವತವನ್ನು ಹೋಲುವ ಸಿದ್ಧಿ ವಿಘ್ನೇಶ್ವರನು ವರ ಸೌಭಾಗ್ಯವನ್ನು ದಯಪಾಲಿಸಲಿ. ಅಲ್ಲದೆ ಅಹಿಣಿ ಮಹಿಣಿಯಾದ ಮಂಗಳ ದೂಘಂಟೆಯ ದಯೆಯಿಂದ ಈ ದಂಪತಿಗಳು ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಲೆಂದು ನಾವುಗಳೆಲ್ಲರೂ ಭಗವಂತನನ್ನು ಕುರಿತು ಪ್ರಾರ್ಥಿಸುವ.

ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆ ಸಮಸ್ತರ ಸಂಗಡ ಕೇಳಿ ಈ ನವದಂಪತಿಗಳನ್ನು ದಿಬ್ಬಣದ ಮುಖ್ಯಸ್ತರಿಗೆ ವಹಿಸಿಕೊಡುವಂತೇವೆ...

ಸಭಿಕರೆಲ್ಲ ರೂ-ಒಳ್ಳೆಕಾರ್ಯವಂತೇವೇ ಎಂಬ ಘೋಷಣೆ ಕೂಗುವರು.

[ಮುಂದಿನ ಸಂಚಿಕೆಗೆ]

# ಕೊಡಗು ಪ್ರಾಂತ್ಯವನ್ನು ಆಳಿದ ಗಂಗರಸರ ವಂಶದ ಸೊಸೆ ಮಹಾಸತಿ "ಹೊನ್ನಮ್ಮನ" ಕಥೆ

ಗಂಗರಸರು 2-3ನೇ ಶತಮಾನಕ್ಕಿಂತಪೂರ್ವದಿಂದಲೂ ಆಡಳಿತ ಮಾಡಿದ ದಾಖಲೆಗಳಿವೆ ಮತ್ತು ಶಿಲಾಶಾಸನಗಳು ಇವೆ. ಗಂಗ ವಂಶಕ್ಕೆ ಸೇರಿದ ಗಂಗರ ಹತ್ತಿರದ ಸಂಬಂಧಿಕರಲ್ಲಿ ಒಬ್ಬ ಗೌಡನ ಸೊಸೆಯಾದ ಮಹಾಸತಿ ಪತಿವ್ರತೆಯೇ ಹೊನ್ನಮ್ಮ.

## ಹೊನ್ನಮ್ಮನ ಕೆರೆ

ಕೊಡಗು ಪ್ರಾಂತ್ಯವು ಗಂಗರಸರ ಆಳ್ವಿಕೆಯಲ್ಲಿ ಇತ್ತು ಎಂದು ಈಗಾಗಲೇ ತಿಳಿದಿರುತ್ತದೆ. ಗಂಗರ ಕಾಲದಲ್ಲಿ ದೇಶ ಸುಭಿಕ್ಷವಾಗಿತು. ಗಂಗರಸರ ಸಂಬಂಧಿಕರು ಅನೇಕರು ಕೊಡಗು ಪ್ರಾಂತ್ಯದ ಪ್ರತಿನಿಧಿಗಳಾಗಿ ಆಡಳಿತವನ್ನು ಉತ್ತಮವಾಗಿ ನಡೆಸಿದ್ದಾರೆ. ಹಾನನಹಳ್ಳಿ ಎಂಬ ಗ್ರಾಮ. ಈ ಗ್ರಾಮದ ಸುತ್ತಾಮುತ್ತಾ ತೆಂಗು, ಅಡಿಕೆ, ಬಾಳೆ, ಹಲಸು ಮಾವು ಮುಂತಾದ ಫಲ ವೃಕ್ಷಗಳು ಹುಲುಸಾಗಿ ಬೆಳೆದಿದ್ದವು. ಹೊಲ ಗದ್ದೆಗಳು ಸಹ ತುಂಬಾ ಫಲಭರಿತವಾಗಿ ಬೆಳೆದಿದ್ದವು. ಆ ಗ್ರಾಮಕ್ಕೆ ಗಡಿನಾಡ ಪಾಳೆಯಗಾರನಾಗಿದ್ದ ಗಂಗರಸರಿಗೆ ಸಾಮಂತನಾಗಿದ್ದುಕೊಂಡು ಕೋಟೆ ಅರಮನೆಗಳನ್ನು ಕಟ್ಟಿಕೊಂಡಿದ್ದನು ಮತ್ತು ಕಷ್ಟಕಾಲದಲ್ಲಿ ಸಹಾಯ ನೀಡುತ್ತಿದ್ದನು.

ರಾಜ್ಯದಲ್ಲಿ ಎಲ್ಲರೂ ಸುಖಸಂತೋಷದಿಂದಿರಲು, ಅನಿರೀಕ್ಷಿತವಾಗಿ ರಾಜ್ಯಕ್ಕೆ ಯುದ್ಧ ಮಾಡುವ ಸ್ಥಿತಿ ಬಂತು. ಆಗ ಸುತ್ತಮುತ್ತಲ ಯಜಮಾನರು, ಜನಾಂಗವನ್ನು ಕೂಡಿಹಾಕಲು ಅರಸನು ಆದೇಶ ಕಳುಹಿಸಿದನು. ವಯಸ್ಸಾದ ತಂದೆಯನ್ನು ಯುದ್ಧಕ್ಕೆ ಕಳುಹಿಸಲು ಒಪ್ಪದೆ, ಮಗನಾದ ಶಿವಯ್ಯನು ಊರಿನ ತರುಣರನ್ನು ಸೇರಿಸಿಕೊಂಡು ಊರಿನವರನ್ನು ತಂದೆಯ ಅನುಮತಿ ಪಡೆದು ಯುದ್ಧಕ್ಕೆ ಹೊರಡಲು ಸಿದ್ದನಾದರು.

ನಿಗದಿಪಡಿಸಿದ ದಿನ ಎಲ್ಲರೂ ಊರ ದೇವಸ್ಥಾನದ ಬಳಿ ಸೇರಿ ಪೂಜೆ ಮಾಡಿ ಜನಗಳಿಗೆ ಪ್ರಸಾದ ಹಂಚಿದರು. ಗೌಡನು ದಂಡನಾಯಕನಾಗಿ ಹೊರಡುವ ಸಮಯದಲ್ಲಿ, ಹೊನ್ನಮ್ಮ ಆರತಿ ಎತ್ತಿ ತಿಲಕ ಇಟ್ಟು ವಿಜಯಮಾಲೆಯನ್ನು ಕೊಂಡು ಬನ್ನಿ ಎಂದು ಹಾರೈಸಿದಳು. ನವಮಾಸ ತುಂಬಿದ ಗರ್ಭಿಣಿ ಹೆಂಡತಿಯನ್ನು ಒಂದೆರಡು ಕ್ಷಣ ನೋಡಿ, ತಂದೆ ತಾಯಿ ಅಣ್ಣಂದಿರಿಗೆ ನಮಸ್ಕಾರ ಮಾಡಿ ಕುದುರೆ ಏರಿ ದಂಡಿನೊಡನೆ ಹೊರಟುಹೋದನು. ನಂತರದ ದಿನಗಳಲ್ಲಿ ಹೊನ್ನಮ್ಮನಿಗೆ ಗಂಡು ಮಗನ ಜನನವಾಯಿತು. ಮೊಮ್ಮಗನನ್ನು ಪಡೆದ ಗೌಡನು ಬಹಳ ಸಂತೋಷಪಟ್ಟನು. ಊರಿಗೆಲ್ಲಾ ಔತಣವನ್ನು ಏರ್ಪಡಿಸಿದನು.

ಯುದ್ಧಕ್ಕೆ ಹೋದ ಶಿವಯ್ಯನು ಎರಡು ವರ್ಷವಾದರೂ ಮರಳಿ ಬಂದಿರಲಿಲ್ಲ. ಗಂಗರಸರ ಭೀಕರ ಹೋರಾಟ ಹಲವಾರು ವರ್ಷಗಳು ಆದರೂ ನಿಲ್ಲಲಿಲ್ಲ. ಹೋದ ತರುಣರು ಬಾರದಿದ್ದುದರಿಂದ ಊರಿನಲ್ಲಿ ವ್ಯವಸಾಯ ಮಾಡುವವರಿಲ್ಲದೆ ಕಣಜಗಳು ಬರಿದಾದವು. ಬೆಳೆಯನ್ನು ಬೆಳೆಯಲು ಜನರಿಲ್ಲದೆ ಊರ ಜನರ ಸ್ಥಿತಿ ಚಿಂತಾಜನಕವಾಯಿತು. ಅಲ್ಲದೆ ಮಳೆಗಾಲವೂ ಕೂಡ ಬರಲಿಲ್ಲ. ಬೆಳೆಗಳು ಒಣಗಿ ಹಾಳಾದವು. ಕುಡಿಯಲು ನೀರಿಲ್ಲದೆ. ಜನರು ಕಂಗಾಲಾದರು. ಆ ಸಮಯದಲ್ಲಿ ಊರ ಜನರು ಅರಸರ ಬಳಿಗೆ ಬಂದು ಬೇಡಿಕೊಂಡರು. ಆಗ ತನ್ನಲ್ಲಿದ್ದ ಸಂಪತ್ತನ್ನೆಲ್ಲಾ ಜನಗಳಿಗೆ ಹಂಚಿದಲ್ಲದೆ, ಊರ ಜನರ ಅನುಕೂಲಕ್ಕಾಗಿ ಒಂದು ಕೆರೆ ತೋಡಿಸಲು ಕೆಲಸಗಾರರಾದ ವಡ್ಡರನ್ನು ಕರೆಸಿ ಕೆಲಸ ಪ್ರಾರಂಭಿಸಿದನು. ತಿಂಗಳಾನುಗಟ್ಟಲೆ ಕೆಲಸ ನಡೆದ ನಂತರ ಗಂಗೆಯು ಕಾಣಿಸಿತು. ಗುಗೆಯನ್ನು ನೋಡಲು ಅರಸುಮನೆತನದ ಹೆಂಗಸರು ಬಂದು ನೋಡಿ ಹೋಗುತ್ತಿದ್ದರು. ಆಗ ಕೆಲಸ ನಿರ್ವಹಿಸುತ್ತಿದ್ದ ವಡ್ಡರವನು ಕಾಮುಕಾ ದೃಷ್ಠಿಯಿಂದ ನೋಡುತ್ತಿದ್ದನು. ಒಂದು ದಿನ ಅರಸನ ಕಿರಿಯ ಸೊಸೆ ಹೊನ್ನಮ್ಮನ ಮೇಲೆ ಆತನ ವಕ್ರದೃಷ್ಟಿ ಬಿತ್ತು. ಆಕೆಯ ಸೌಂಧರ್ಯ ಆತನನ್ನು ಹುಚ್ಚು ಹಿಡಿಸಿತು. ಒಂದು ದಿನ ಹೊನ್ನಮ್ಮನು ದೇವಸ್ಥಾನಕ್ಕೆ ಹೋಗಿ ಬರುತ್ತಿರಲು ಜೊತೆಯಲ್ಲಿದ್ದ ಹೆಂಗಸರು ಹಿಂದು ಮುಂದಾಗಿ ಬಂದಿದ್ದರು. ಹೊನ್ನಮ್ಮನೊಬ್ಬಳೇ ಹಿಂದೆ ನಿಧಾನವಾಗಿ ಬರುತ್ತಿದ್ದಳು. ಒಬ್ಬಂಟಿಯಾಗಿ ಬರುತ್ತಿದ್ದ ಹೊನ್ನಮ್ಮಳನ್ನು ನೋಡಿದ ಈ ವಡ್ಡರವನು ಆಕೆಯನ್ನು ಹೇಗಾದರೂ ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಆತನ ಬಲವಂತಕ್ಕೆ ಒಪ್ಪದ ಚತುರೆಯೂ, ಬುದ್ಧಿವಂತಳೂ ಆದ ಹೊನ್ನಮ್ಮಳು ಬೇಗ ಮನೆ ಸೇರಿಕೊಂಡಳು. ಕೆರೆ ಕೆಲಸ ಮಾಡುತ್ತಿದ್ದ ವಡ್ಡರವನು ಕೆರೆ ಕೆಲಸ ನಿಲ್ಲಿಸಿ ತೊಂದರೆಕೊಟ್ಟು ಕಾಮುಕ ಚಪಲ ತೀರಿಸಿಕೊಳ್ಳಲು ಮನಸ್ಸು ಮಾಡಿ ಆ ಕೆರೆ ಕೆಲಸವನ್ನು ಸೇಡಿನಿಂದ ನಿಲ್ಲಿಸಿದನು. ಅರಸನು ವಡ್ಡವರನ್ನು ಕರೆಸಿ, ಕೆಲಸವೇಕೆ ನಿಂತು ಹೋಗಿದೆ, ಕೆಲಸವನ್ನು ಮುಂದುವರೆಸಿರೆಂದು ವಿಚಾರಿಸಲು, ಅದಕ್ಕೆ ವಡ್ಡರವನು ಸ್ವಾಮಿ ನೀರಿನ ಬುಗ್ಗೆಯು ಸಿಗಬೇಕಾದರೆ ನರಬಲಿ ಬೇಕು. ನಿಮ್ಮ ಎಂಟನೇ ಮಗನ ಹೆಂಡತಿ ಒಂದು ಮಗುವಿನ ತಾಯಿಯಾದವಳೇ ಎಂದು ತಿಳಿ

ಈ ವಿಚಾರ ಕೇಳಿದ ಅರಸನು ಚಿಂತಾಕ್ರಾಂತನಾದನು
ಪಚಾರಗಳನ್ನು ಬಿಟ್ಟು ಯೋಚನೆಯಲ್ಲಿ ತೊಡಗಿ
ಮಹಾ ಪತಿವ್ರತೆಯರುಗಳಾದ ಸೊಸೆ
ಯೋಚನೆ ಮಾಡತೊಡಗಿದರು. ಆ ಕಡೆ
ು ಅರಸರ ಬಗ್ಗೆ ಅಪಪ್ರಚಾರವನ್ನು ಮಾಡ
ರು. ಇದನ್ನು ಕೇಳಿ ಊರ ಜನರೆಲ್ಲಾ ಅರಸರ ಬಗ್ಗೆ
ತ್ತಿದರು. ಹೇಗೊ ತನ್ನ ಮಗನಿಗೆ ಬೇರೆ
ಮಾಡಬಹುದು. ಪ್ರಜೆಗಳ ಹಿತಕ್ಕಾಗಿ ತನ್ನ ಸೊಸೆ
ಲ್ಲಿ ಕೊಟ್ಟರೇನಂತೆ ಎನ್ನುತ್ತಾ ಪ್ರಜೆಗಳು ಅರಸ
ದಿಸುತ್ತಿದ್ದರು. ಜನರಿಗೆ ನೀರಿಲ್ಲದೆ ಪಡಬಾರದ
ಳು ಆಗಿದ್ದವು. ಸದರಿ ವಿಚಾರ ಉಳಿದ ಗೌಡನುಕ್ಕ
ಸೆಯರಿಗೂ ತಿಳಿಯಿತು. ತಂದೆಗೆ ಹೆದರಿ ಯಾರಿಗೂ
ಮಾಡದೆ ಸುಮ್ಮನಿದ್ದರು. ಹೊನ್ನಮ್ಮಳು ಇಷ್ಟು
ರೂ ತನ್ನ ಗಂಡ ಬಾರದಿರುವಿಕೆಗೆ ದುಃಖಿತಳಾ
ಊರು ಗೌಡನು ಪ್ರಜೆಗಳ ಸ್ಥಿತಿ ನೋಡಿ
ಮಾತುಗಳಿಂದಬೇಸತ್ತು ಪ್ರಜೆಗಳ ಕಷ್ಟಕಾಲ
ಕೂಲತೆಗಳನ್ನು ಮಾಡಿಕೊಡದೆ ಹೋದರೆ ನಾನಿದ್ದು
ಪ್ರಯೋಜನ ಎಂದು ಆಲೋಚಿಸಿ
ಹೊನ್ನಮ್ಮಳನು ವಡ್ಡರವನ ಅಪೇಕ್ಷೆಯಂತೆ
ಲು ನಿರ್ಧರಿಸಿದನು. ಮಗ ಶಿವಯ್ಯನು ಇಷ್ಟು
ರೂ ಬರಲಿಲ್ಲ. ಇನ್ನು ಕಾಯುವುದು ಪ್ರಯೋಜನ
ು ತಿಳಿದು, ತನ್ನ ಹೆಂಡತಿಯ ಮುಖಾಂತರ
ನ್ನು ಸೊಸೆಗೆ ತಿಳಿಸಿದನು. ಅವಳು ಸಂತೋಷದಿಂದ
ಾಗಿ ತ್ಯಾಗಮಾಡಲು ಒಪ್ಪಿದಳು. ಅವಳಿಗೆ ಮದುವೆ
ದಿದ್ದ ಧಾರೆ ಸೀರೆಯನ್ನು, ಬಟ್ಟೆ, ಒಡವೆಗಳನ್ನು
ರು. ಅರಿಸಿನ ಕುಂಕುಮವನ್ನು ಇಟ್ಟರು. ಹೊನ್ನಮ್ಮನ
ಚಿನ್ನದ ಕೊಡವನ್ನು ಕೊಟ್ಟು, ಹೊಸ ಕೆರೆಗೆ
ೀರು ತರಲು ಕಳುಹಿಸಿದರು. ಮಹಾಸತಿ ಹೊನ್ನ
ನ್ನ ಅಳಿಗಾಲ ಬಂದಿದೆ ಎಂದು ತನ್ನ ಮಗನನ್ನು
ಂದ ಕೈ ಆಡಿಸಿ ದುಃಖದಿಂದ ತನ್ನ ಮನಸ್ಸಿನಲ್ಲಿ ನಿನ್ನ
ರುದ್ಧದಿಂದ ಬರುವವರೆಗೆ ನಿದ್ರಿಸುತ್ತಿರು ಮಗನೇ
ೊಂಡು ಹರಸಿದಳಲ್ಲದೆ, ಹಾಕಿದ ಬಾಗಿಲು ತೆಗೆಯದಿರ
ು ಹೊಸಿಲ ಬಳಿ ಬಂದು ಬಾವಂದಿರಿಗೂ ಅತ್ತಿಗೆಯ
ನಮಸ್ಕರಿಸಿ ಕೆರೆ ಕಡೆ ಹೊರಟಳು.

ೂಸೆ ಹೊನ್ನಮ್ಮ ಕೆರೆ ಕಡೆ ಹೋಗುತ್ತಿದ್ದಾಗ
ಎರಡು ಬದಿಯಲ್ಲಿ ಜನರು ನಿಂತು ಆಶೀರ್ವದಿಸಿ
ಹೊನ್ನಮ್ಮ ಕೆರೆಯ ಹತ್ತಿರಕ್ಕೆ ಬಂದಳು. ನಿಂತು
ಳು. ಪ್ರಜೆಗಳಿಗೆ ಬೇಕಿದ್ದನೀರಿಗಾಗಿ ಮೆಟ್ಟಿಲುಗಳನ್ನು
ಮ್ಮಾ ಎಂದು ತಿಳಿಸಿದರು. ಹೊನ್ನಮ್ಮ ಒಂದು
ಮೆಟ್ಟಿಲನ್ನು ಇಳಿದಳು, ಕಾಲುಗಳನ್ನು ನೀರಿನೊಳಗೆ ಇಟ್ಟಳು. ಹಾಗೆಯೇ ಒಂದೊಂದೆ ಮೆಟ್ಟಿಲು ಇಳಿಯುತ್ತಿದ್ದಂತೆ ನೀರು ತುಂಬುತಿತ್ತು. ಕೊನೆಯ ಮೆಟ್ಟಿಲಿನಿಂದ ದೇವರನ್ನು ಪ್ರಾರ್ಥಿಸಿ ನೀರಿನೊಳಗೆ ಮಾಯವಾದಳು. ಗಂಗೆಯು ಹೊನ್ನಮ್ಮಳನ್ನು ಸ್ವೀಕರಿಸಿತು. ಮಹಾಸತಿ ಹೊನ್ನಮ್ಮನ ಪಾದಸ್ಪರ್ಶದಿಂದ ಗಂಗೆ ಉಕ್ಕಿ ಮೇಲೆರಿದಳು. ಹೊನ್ನಮ್ಮ ಗಂಗೆಯಲ್ಲಿ ಲೀನ ವಾದಳು. ತದನಂತರ ಈ ಕೆರೆಗೆ ಹೊನ್ನಮ್ಮನ ಕೆರೆ ಎಂದು ಹೆಸರಾಯಿತು. ಅನಂತರ ಕೆರೆಯ ಉಳಿದ ಕೆಲಸವನ್ನು ಪೂರ್ಣಗೊಳಿಸಿ ಪ್ರಜೆಗಳ ಕಷ್ಟ ತೊಂದರೆಗಳು ದೂರವಾಗಿ ದೇಶವು ಸುಭಿಕ್ಷದಿಂದ ಇರಲು ಅನುಕೂಲವಾಯಿತು. ಗ್ರಾಮದ ಜನರು ಕೆರೆಯ ಏರಿಯಾ ಮೇಲೆ ಹೊನ್ನಮ್ಮಳ ದೇವಸ್ಥಾನವನ್ನು ಕಟ್ಟಿಸಿದರು. ಹೊನ್ನಮ್ಮ ಮತ್ತು ಗಂಡ ಶಿವಯ್ಯನವರನ್ನು ಶಿವಪಾರ್ವತಿಯರೆಂದು ಈಗಲೂ ಪೂಜಿಸುತ್ತಿದ್ದಾರೆ. ಇಂತಹ ಮುಕುಟಮಣಿ ರತ್ನದಂತೆ ಇತಿಹಾಸದಲ್ಲಿ ಒಕ್ಕಲಿಗರ ಆಧಿಶಕ್ತಿಯಂತೆ ಜನರ ಮನದಲ್ಲಿ ಶೋಭಾಯಮಾನವಾಗಿದ್ದಾಳೆ ಈ ಹೊನ್ನಮ್ಮ.

ಈಗಲೂ ಕೊಡಗು ಪ್ರಾಂತ್ಯದಲ್ಲಿಯೂ, ಪಿರಿಯಾಪಟ್ಟಣ ತಾಲ್ಲೋಕಿನಲ್ಲಿಯೂ ಹೊನ್ನಮ್ಮನ ಕುಟುಂಬದವರು, ಹೊನ್ನಮ್ಮನ ವಟಾರದವರು, ಹೊನ್ನಮ್ಮನ ವರ್ಗದವರು ಎಂದು ಕರೆದುಕೊಳ್ಳುವ ಜನರಿದ್ದು, ತಮ್ಮ ಮನೆಯಲ್ಲಿ ಹುಟ್ಟಿದ ಹೆಣ್ಣು ಮಕ್ಕಳಿಗೆ ಹೊನ್ನಮ್ಮ ಎಂದು ಹೆಸರಿಡುವ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

○ **ಟಿ. ಆರ್. ಮುದ್ದೇಗೌಡ** ಮೈಸೂರು

## ಸೌರವ್ಯೂಹ

ಸೂರ್ಯನ ವ್ಯಾಸ : 1392000 ಕಿ.ಮೀ.ಗಳು
ಸೂರ್ಯನ ಉಷ್ಣತೆ : 6000 ಡಿಗ್ರಿ ಸೆಂಟಿಗ್ರೇಡ್
ಭೂಮಿಯಿಂದ ದೂರ : 93 ದಶಲಕ್ಷ ಮೈಲಿಗಳು
ಚಂದ್ರನ ವ್ಯಾಸ : 3476 ಕಿ. ಮೀ.
ಬುಧಗ್ರಹದ ವ್ಯಾಸ : 4880 ಕಿ.ಮೀ.
ಗುರುಗ್ರಹ : ದೊಡ್ಡಗ್ರಹ
ಶುಕ್ರಗ್ರಹದ ವ್ಯಾಸ : 12104 ಕಿ.ಮೀ.
ಮಂಗಳಗ್ರಹದ ವ್ಯಾಸ : 6787 ಕಿ.ಮೀ.
ಭೂಮಿಯಿಂದ ದೂರ : 80 ದಶಲಕ್ಷ ಕಿ.ಮೀ.
ಭೂಮಿಯಿಂದ ಶನಿಗ್ರಹಕ್ಕೆ ದೂರ–1275 ದಶಲಕ್ಷ ಕಿ.ಮೀ.
ಯುರೇನೆಸ್‌ನ ವ್ಯಾಸ–5800 ಕಿ.ಮೀ.
ನೆಪ್ಚ್ಯೂನ್ ಭೂಮಿಯಿಂದ ದೂರ 4497 ದಶಲಕ್ಷ ಕಿ.ಮೀ.
ಪ್ಲೂಟೊದ ವ್ಯಾಸ–6000 ಕಿ.ಮೀ.

ಸಂಗ್ರಹ : **ಅಂಬ್ರಾಟ ಭಗವತಿಪ್ರಸಾದ್ ತಮ್ಮಯ್ಯ,**

# ಅನ್ಯ ಸಂಸ್ಕೃತಿಯ ದಾಳಿಯನ್ನು ಎದುರಿಸಿ ಕನ್ನಡ ಸಾಹಿತ್ಯ ಬೆಳೆದು ಬಂದ ರೀತಿ

ಮೈಸೂರು ರಾಜ್ಯ 1956ರಲ್ಲಿ ಅಸ್ತಿತ್ವಕ್ಕೆ ಬಂತು. ಕನ್ನಡವೇ ಪ್ರಧಾನವಾಗಿ ಆಡುನುಡಿಯಾಗಿರುವ ಎಲ್ಲಾ ಭಾಗಗಳು ಹೆಚ್ಚು ಕಡಿಮೆ ಮೈಸೂರು ರಾಜ್ಯದಲ್ಲಿ ಸೇರಿವೆ. ಕನ್ನಡ ಆಡುನುಡಿಯಾಗಿರುವ ಕೇವಲ ನೆರೆ ಪ್ರದೇಶಗಳು ಈ ಗಡಿಯ ಆಚೆಗೆ ಉಳಿದಿವೆ ಎಂಬುವುದು ನಿಜ. ಆದರೆ ರಾಜ್ಯದ ಈಗಿನ ಗಡಿಯೊಳಗಿರುವ ಕೆಲವು ಭಾಷೆಗಳ ಬಗ್ಗೆ ಅನ್ಯಭಾಷೆಗಳ ಪರವಾಗಿಯೋ [ವಿಶೇಷವಾಗಿ ಮರಾಠಿ ತೆಲುಗುಗಳ ಪರವಾಗಿ] ಇಂತದೆ ನ್ಯಾಯದ ಮಾತು ಎದ್ದಿದೆ. ಅನೇಕ ಭಾಷೆಗಳಿರುವ ಭಾರತದಂತಹ ವಿಶಾಲ ರಾಷ್ಟ್ರದಲ್ಲಿ ಇಂತಹ ಪರಿಸ್ಥಿತಿ ತೀರ ಅನಿವಾರ್ಯವಾದುದು. ಭಾಷೇತರವಾದ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳದೆಯೇ ಪ್ರಾಂತ್ಯ ನಿರ್ಮಾಣ ಮಾಡಿದರೂ ಭಾಷೆಯ ಗಡಿಗಳನ್ನು ಅಡ್ಡ ಹಾಯುವ ದ್ವಿಭಾಷ ಪದ್ಧತಿಯೂ ಇದ್ದೇ ಇರುತ್ತದೆ. ಕರ್ನಾಟಕದಲ್ಲಿ ಸುಮಾರು 170 ಭಾಷೆಗಳಿರುತ್ತವೆ.

ಕನ್ನಡ ಭಾಷೆಯನ್ನು ಕುರಿತು ಅನೇಕ ನಿಷ್ಪತ್ತಿಗಳನ್ನು ಹೇಳಲಾಗಿದೆ. ಭಾಷಾಶಾಸ್ತ್ರದ ದೃಷ್ಟಿಯಿಂದ ಹೆಚ್ಚು ಸಂಭಾವ್ಯವಾದ ಮೂಲ ರೂಪವೆಂದರೆ "ಕರಿಯ ನೆಲ" ಎಂಬ ಅರ್ಥಕೊಡುವ ಕರ್-ನಾಡು ಎಂಬ ಪದ. ಇದೇ ಸಂಸ್ಕೃತೀಕರಣಗೊಂಡು ಕರ್ನಾಟಕ ಎಂಬುದಾಗಿ ನಾಡು, ನುಡಿ ಎರಡನ್ನೂ ಸೂಚಿಸುವ ಪದವಾಯಿತು. ಕನ್ನಡ ಎಂಬುವುದು ಕರ್ನಾಟಕ ಎಂಬ ಪದದ ಕ್ರಮಬದ್ಧ ಬೆಳವಣಿಗೆಯಾಗುತ್ತದೆ.

ಕನ್ನಡ ಭಾಷೆಯು ಒಂದು ಸ್ವತಂತ್ರ ಭಾಷೆಯಾಗಿ ಬೆಳೆದ ಮೇಲೆ ಅನೇಕ ಶತಮಾನಗಳ ಕಾಲ ಲಿಖಿತ ರೂಪಕ್ಕಿಳಿಯದೆ ಕೇವಲ ಆಡುನುಡಿಯಾಗಿಯೇ ಉಳಿದಂತೆ ತೋರುತ್ತದೆ. ಸುಮಾರು ಕ್ರಿ.ಶ. 450ರ ಹಲ್ಮಿಡಿ ಶಾಸನವು ಸದ್ಯಕ್ಕೆ ಲಭ್ಯವಾಗಿರುವ ಅತ್ಯಂತ ಪ್ರಾಚೀನವಾದ ಕನ್ನಡ ಲೇಖನವಾಗಿದೆ. ಮೂರನೆಯ ಶತಮಾನದ ಅಶೋಕನ ಶಿಲಾಶಾಸನದಲ್ಲಿರುವ 'ಇಸಿಲಿ' ಎಂಬ ಪದ ಕನ್ನಡವೆಂದು ಕೆಲವರು ಅಭಿಪ್ರಾಯ ಪಟ್ಟರು ಅದು ತಮಿಳಿನ ಎಯಿಲ್ ಎಂಬ ಶಬ್ದಕ್ಕೆ ಕೋಟೆ ಎಂಬ ಅರ್ಥವಿದ್ದು ಅದರ ಜಾತಿ ಶಬ್ದವಾದ ಕನ್ನಡ ಎಸಿಲ್ ಎಂಬ ಶಬ್ದವೇ ಆರ್ಯೀಕರಣಗೊಂಡು ಇಸಿಲಿ ಎಂಬ ರೂಪ ತಾಳಿದೆ ಎಂದು ಕೆಲವರು ಪ್ರತಿಪಾದಿಸಿದ್ದಾರೆ.

ನಂತರ ಲಭ್ಯವಾಗಿರುವ ಅತ್ಯಂತ ಹಳೆಯ ಗ್ರಂಥ ಎಂದರೆ ಕವಿರಾಜ್ಯಮಾರ್ಗ ಇದರಲ್ಲಿ ಸಾಕಷ್ಟು ಕನ್ನಡ ಪದಗಳಿದ್ದರೂ ಅದು ತಮಿಳು ಭಾಷೆಯ ಸಂಬಂಧವನ್ನು ಹೊಂದಿರುವುದು ಕಂಡುಬರುತ್ತದೆ.

ಪೂರ್ವದ ಹಳೆಗನ್ನಡ ಸ್ಥಿತಿಯಿಂದ ಭಾಷೆಯು ಕ್ರಮೇಣ ಬದಲಾಯಿಸುತ್ತಾ ಬಂತು. ಸುಮಾರು ಎಂಟನೆಯ ಶತಮಾನಕ್ಕೆ ಅದು ತನ್ನ ಹಳೆಯ ವೈಶಿಷ್ಟ್ಯವನ್ನು ಕೊಡವಿಕೊಂಡು ಬಂತು.

ಹನ್ನೆರಡನೆ ಶತಮಾನದಲ್ಲಿ ನಾಗವರ್ಮ ರಚಿಸಿದ ತನ್ನ ಶಬ್ಧಸ್ಮೃತಿ ಎಂಬ ಗ್ರಂಥದಲ್ಲಿ ಹಳೆಗನ್ನಡದ ವ್ಯಾಕರಣವನ್ನು ಬಳಸಿರುವುದನ್ನು ನೋಡಿದಾಗ ಅದು ತನ್ನ ಹಳೆಯ ಭಾಷೆಗೆ ತಿರುಗಿಬಿತ್ತು. ನಂತರ ಅದೇ ರೀತಿ ಕೇಶಿರಾಜನ ಶಬ್ಧಮಣಿ ದರ್ಪಣದಲ್ಲಿಯೂ ಸಹ ಮತ್ತೆ ಹಳೆಗನ್ನಡ ವ್ಯಾಕರಣ ಅಡಕವಾಗಿದೆ. ಇದಾದ ನಂತರ 1604ರಲ್ಲಿ ಭಟ್ಟಾಕಳಂಕನ ಶಬ್ಧಾನುಶಾಸನವು ಹಳೆಗನ್ನಡದ ಲಕ್ಷಣವನ್ನು ಹೊಂದಿದೆ.

ನಡುಗನ್ನಡ ಹೊಸಗನ್ನಡ ಎರಡೂ ಸಂಧಿಕಾಲದಲ್ಲಿ ಸಹಜವಾಗಿಯೇ ತುಂಬಾ ಧೀರ್ಘವಾದುದಾಗಿದೆ. ನಡುಕನ್ನಡ ಯಾವಾಗ ಹೊಸಗನ್ನಡವಾಯಿತೆಂದು ಕಂಡುಹಿಡಿಯಲು ಸಾಧ್ಯವಿಲ್ಲ.

ಕ್ರಿ.ಶ. 1799ರಲ್ಲಿ ಟಿಪ್ಪು ಸುಲ್ತಾನನ ಪತನವಾಗಿ ಮೈಸೂರು ಸಿಂಹಾಸನ ಮುಮ್ಮಡಿ ಕೃಷ್ಣರಾಜ ಒಡೆಯರ ವಶಕ್ಕೆ ಬಂದ ಮೇಲೆ ಆಸ್ಥಾನದಲ್ಲಿ ಹೊಸಗನ್ನಡ ಗ್ರಾಂಥೀಕ ಭಾಷೆಯಾಗಿ ರೂಪುಗೊಂಡಿತು

ಹೊಸಗನ್ನಡದಲ್ಲಿ ಸ್ಪಷ್ಟವಾದ ಮೂರು ಪ್ರಾಂತೀಯ ಬೇಧಗಳಿದ್ದು ಅವುಗಳಿಗೆ ಮೈಸೂರು ಕನ್ನಡ, ಧಾರವಾಡ ಕನ್ನಡ ಮತ್ತು ಮಂಗಳೂರು ಕನ್ನಡವೆಂಬ ಹೆಸರು ಜನಸಾಮಾನ್ಯವಾಗಿದೆ. ನಾಡಿನ ಉದ್ದಗಲಕ್ಕೂ ಹಲವಾರು ಭಾಷೆಗಳಿದ್ದರೂ ಶಿಷ್ಟ ಕನ್ನಡ ಮಾತ್ರ ರಕ್ಷಿತವಾಗಿ ನಾಡಿನಾದ್ಯಂತ ಬೆಳೆದು ಬಂದಿದೆ.

ದ್ರಾವೀಡ ಭಾಷೆಯಿಂದ ಬಂದ ಕನ್ನಡದಂತೆ ಪ್ರಾಂತೀಯ ಭಾಷೆಯಾಗಿ ಇನ್ನೂ ಉಳಿದಿರುವ ಎರಡು ಭಾಷೆಯೆಂದರೆ, ಕೊಡವ ಮತ್ತು ತುಳು.

ಅನೇಕ ಶತಮಾನಗಳಿಂದಲೂ ಕನ್ನಡದೊಡನೆ ಆಪ್ತ ಸಂಬಂಧವನ್ನು ಬೆಳಸಿಕೊಂಡು ಬಂದ ತಮಿಳು, ತೆಲುಗು ಮತ್ತು ಮಲೆಯಾಳಗಳಂಥ ಹಿರಿಯ ದ್ರಾವೀಡ ಭಾಷೆಗಳ ವಿಷಯವನ್ನಾಗಲೀ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಅವುಗಳ ಕೆಲವು ಭಾಷಾಭೇದಗಳ ಬಗ್ಗೆಯಾಗಲೀ ಸಂಕ್ಷಿಪ್ತವಾಗಿ ಬರೆಯುವುದು ಕಷ್ಟ. ಕನ್ನಡದೊಡನೆ ಬಹುಕಾಲ ನಿಕಟ ಸಂಪರ್ಕ ಪಡೆದಿರುವ ಸಂಸ್ಕೃತ ಪ್ರಾಕೃತಗಳು, ಮರಾಠಿ, ಹಿಂದಿ-ಉರ್ದು ಇತ್ಯಾದಿ ಇಂಡೋ ಆರ್ಯನ್ ಭಾಷೆಗಳ ವಿಷಯವೂ ಬಹಳಷ್ಟು ಇದೆ. ಕೊಂಕಣಿ ಭಾಷೆಯನ್ನಾಡುವ. ಜನರು ಸುಮಾರು 37ರಷ್ಟು ಕರ್ನಾಟಕದಲ್ಲಿ ಇದ್ದಾರೆ. ಕೊಂಕಣಿ ಭಾಷೆ ಮರಾಠಿ ಮತ್ತು ಗುಜ